# ಕರ್ನಾಟಕ ವಿಧಾನ ಪರಿಷತ್ತು

| | |
|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | 307 |
| ಸದಸ್ಯರ ಹೆಸರು | ಶ್ರೀ ಕೆ.ಎ.ತಿಪ್ಪೇಸ್ವಾಮಿ (ನಾಮನಿರ್ದೇಶನ ಹೊಂದಿದವರು) |
| ಉತ್ತರಿಸುವ ದಿನಾಂಕ | 03.02.2021 |
| ಉತ್ತರಿಸುವ ಸಚಿವರು | ಕೃಷಿ ಸಚಿವರು |

| ಕ್ರ ಸಂ | ಪ್ರಶ್ನೆ | ಉತ್ತರ |
|---|---|---|
| ಅ | ಸರ್ಕಾರವು ಕೃಷಿಯಲ್ಲಿ ನಾಡೆಪ್ (NADEP) ಕಾಂಪೋಸ್ಟಿಂಗ್, ವರ್ಮಿ ಕಾಂಪೋಸ್ಟಿಂಗ್, ದ್ರುವ ಜೈವಿಕ ಗೊಬ್ಬರವನ್ನು ಬಳಸುವ ಮೂಲಕ ಕೃಷಿಯಲ್ಲಿ ವೆಚ್ಚವನ್ನು ಕಡಿತಗೊಳಿಸುವ ಬಗ್ಗೆ ಯಾವುದಾದರೂ ಹೊಸ ಮಾರ್ಗಸೂಚಿಗಳನ್ನು ಹೊರಡಿಸಿದೆಯೇ: (ವಿವರಗಳನ್ನು ಒದಗಿಸುವುದು) | ಸರ್ಕಾರವು ಕೃಷಿಯಲ್ಲಿ ನಾಡೆಪ್(NADEP) ಕಾಂಪೋಸ್ಟಿಂಗ್, ವರ್ಮಿ ಕಾಂಪೋಸ್ಟಿಂಗ್, ದ್ರುವ ಜೈವಿಕ ಗೊಬ್ಬರವನ್ನು ಬಳಸುವ ಮೂಲಕ ಕೃಷಿಯಲ್ಲಿ ವೆಚ್ಚವನ್ನು ಕಡಿತಗೊಳಿಸಲು ಯಾವುದೇ ಹೊಸ ಮಾರ್ಗಸೂಚಿಗಳನ್ನು ಹೊರಡಿಸಿರುವುದಿಲ್ಲ. ಪ್ರಸ್ತುತ ಇಲಾಖೆಯ ವಿವಿಧ ಯೋಜನೆಗಳಲ್ಲಿ ಮಣ್ಣಿನ ಸತ್ವ ಹೆಚ್ಚಿಸಲು ಕೃಷಿ ಪರಿಕರಗಳಾದ ಜೈವಿಕ ಗೊಬ್ಬರಗಳು, ಎರೆಹುಳು ಗೊಬ್ಬರ, ಸಿಟಿ ಕಾಂಪೋಸ್ಟ್, ಸಾವಯವ ಗೊಬ್ಬರಗಳು, ಲಘು ಪೋಷಕಾಂಶಗಳು, ಮಣ್ಣು ಸುಧಾರಕಗಳು, ಹಸಿರೆಲೆ ಗೊಬ್ಬರ ಬೀಜಗಳನ್ನು ಬೇಡಿಕೆಗನುಗುಣವಾಗಿ ರೈತರಿಗೆ ಇಲಾಖೆಯ ರೈತ ಸಂಪರ್ಕ ಕೇಂದ್ರಗಳ ಮೂಲಕ ರಿಯಾಯತಿ ದರದಲ್ಲಿ ವಿತರಣೆ ಮಾಡಲಾಗುತ್ತಿದೆ. |
| ಆ | ಈ ಗೊಬ್ಬರವನ್ನು ಬಳಸುವುದರ ಮೂಲಕ ಕೃಷಿ ಭೂಮಿ ಹೆಚ್ಚು ಫಲವತ್ತಾಗುತ್ತದೆ ಮತ್ತು ಹೆಚ್ಚಿನ ಇಳುವರಿಯನ್ನು ನೀಡುತ್ತದೆ ಎಂಬುದು ನಿಜವೇ; ಹಾಗಿದ್ದಲ್ಲಿ, ಕಳೆದ ಮೂರು ವರ್ಷಗಳಿಂದ ಇಂದಿನವರೆಗೆ ಪ್ರತಿ ಹೆಕ್ಟೇರ್‌ಗೆ ಬೆಳೆಗಳ ಸ್ಥಿತಿಯೇನು; (ಜಿಲ್ಲಾವಾರು ಸಂಪೂರ್ಣ ಮಾಹಿತಿ ನೀಡುವುದು) | ಕೃಷಿಯಲ್ಲಿ ವಿವಿಧ ಸಾವಯವ ಗೊಬ್ಬರ ಮತ್ತು ಜೈವಿಕ ಗೊಬ್ಬರಗಳ ಬಳಕೆಯಿಂದ ಮಣ್ಣಿನಲ್ಲಿ ಇಂಗಾಲ ಅಂಶವು ಹೆಚ್ಚಳವಾಗಲಿದ್ದು, ಅದರಿಂದ ಮಣ್ಣಿಗೆ ಹೆಚ್ಚಿನ ನೀರನ್ನು ಹಿಡಿದಿಟ್ಟುಕೊಳ್ಳಲು ಅನುಕೂಲಕರವಾಗಲಿದೆ ಹಾಗೂ ಲಭ್ಯವಿರುವ ಪೋಷಕಾಂಶಗಳನ್ನು ಪರಿಣಾಮಕಾರಿಯಾಗಿ ಸದ್ಬಳಕೆಯಾಗಲಿದೆ. ಅದರಿಂದ ಕೃಷಿ ಭೂಮಿ ಹೆಚ್ಚು ಫಲವತ್ತಾಗುವುದಲ್ಲದೇ ಉತ್ತಮ ಇಳುವರಿಯನ್ನು ಪಡೆಯಬಹುದಾಗಿದೆ ಎಂದು ಅಧ್ಯಯನಗಳಿಂದ ತಿಳಿದು ಬಂದಿರುತ್ತದೆ. ಇದಕ್ಕೆ ಹೊರತಾಗಿ ರಾಜ್ಯದಲ್ಲಿ ಹಲವಾರು ಸಾವಯವ ಕೃಷಿ ಉತ್ತೇಜನ ಕಾರ್ಯಕ್ರಮಗಳನ್ನು ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ಹಮ್ಮಿಕೊಳ್ಳಲಾಗಿರುತ್ತದೆ. |
| ಇ | ಹೆಚ್ಚಿನ ಇಳುವರಿ ಪಡೆಯುತ್ತಿರುವ ರೈತರಿಗೆ ಪ್ರೋತ್ಸಾಹಧನ ನೀಡುವ ಮೂಲಕ ಸರ್ಕಾರ ರೈತರನ್ನು ಸನ್ಮಾನಿಸಿದೆಯೇ? (ಜಿಲ್ಲಾವಾರು ರೈತರ ಸಂಖ್ಯೆ, ಹೆಸರು ನೀಡುವುದು). | ಕೃಷಿಯಲ್ಲಿ ಸಾವಯವ ಮತ್ತು ಜೈವಿಕ ಗೊಬ್ಬರಗಳ ಬಳಕೆಯಿಂದ ಹೆಚ್ಚಿನ ಇಳುವರಿ ಪಡೆಯುತ್ತಿರುವ ರೈತರಿಗೆ ಯಾವುದೇ ಪ್ರೋತ್ಸಾಹ ಧನ ನೀಡಿ ಸನ್ಮಾನಿಸುವ ಕಾರ್ಯಕ್ರಮವಿರುವುದಿಲ್ಲ. ಆದರೂ ಒಟ್ಟಾರೆಯಾಗಿ ವಿವಿಧ ಬೆಳೆಗಳಲ್ಲಿ ಹೆಚ್ಚು ಇಳುವರಿಯನ್ನು ಪಡೆಯುವ ರೈತರನ್ನು ಇಲಾಖೆಯಿಂದ ಸನ್ಮಾನಿಸಲಾಗುತ್ತಿದೆ. |

ಸಂಖ್ಯೆ: AGRI-ACT/17/ 2021

(ಬಿ.ಸಿ. ಪಾಟೀಲ್)
ಕೃಷಿ ಸಚಿವರು